# ಒಳಗೊಳ್ಳುವಿಕೆಯ ಆರಂಭ- ತರಗತಿಯೊಳಗೆ ಆಸನ ಕ್ರಮದ ಶಿಸ್ತು

ನೀಲಂ ಶಿಂಧೆ



ನಾನು ವಿಶೇಷ ಮಕ್ಕಳೊಂದಿಗೆ ಕೆಲಸ ಮಾಡಲು ಮೊದಲು ಶುರು ಮಾಡಿದಾಗ, ಭಾವ ತೀವ್ರತೆಗೆ ಒಳಗಾಗಿದ್ದೆ ಮತ್ತು ನನ್ನ ವಿಷಯ ಕ್ಷೇತ್ರದ ಬಗ್ಗೆ ನನಗೆ ಅಪಾರ ಒಲವು ಇತ್ತು. ವೃತ್ತಿಪರ ಚಿಕಿತ್ಸಕಳಾಗಿ, ನಾನು ನನ್ನ ವಿದ್ಯಾರ್ಥಿಗಳನ್ನು ತರಗತಿಯೊಳಗಷ್ಟೇ ಅಲ್ಲದೆ, ಆಟೋಟ, ಕಲೆ, ಸ್ವಯಂ ಕಾಳಜಿ ಮುಂತಾದ ಚಟುವಟಿಕೆಗಳ ವೇಳೆಯೂ ಗಮನಿಸಬೇಕಾದ ಅಗತ್ಯವಿತ್ತು. ಅದಲ್ಲದೆ, ವಿಶೇಷ ಮಕ್ಕಳ ತರಗತಿಯ ನಿರ್ವಹಣೆಯ ವಿಚಾರದಲ್ಲಿ ನನಗೆ ಯಾವುದೇ ತಿಳಿವಳಿಕೆ ಇರಲಿಲ್ಲ. ಪಾಠ ಮಾಡಲು ಚೆನ್ನಾಗಿ ತಯಾರಾಗಿ ಹೋದರೆ ಎಲ್ಲವನ್ನೂ ನಿಭಾಯಿಸಿದಂತೆ ಎಂದು ನಾನು ಭಾವಿಸಿದ್ದೆ. ಆದರೆ ವಾಸ್ತವ ಹಾಗಿರಲಿಲ್ಲ!

ಶಾಲೆಯೊಂದು ವಿಶೇಷ ಸಾಮರ್ಥ್ಯವುಳ್ಳ ಮಕ್ಕಳಿಗೆ ಬೇಕಾದ ತರಬೇತಿ ಮತ್ತು ಉತ್ತೇಜನ ಒದಗಿಸುವ ಶಾಲೆ ಆಗಿರದಿದ್ದರೆ, ವಿಶೇಷ ಶಾಲೆಯೊಂದರಲ್ಲಿ,—— ವಿಶೇಷ ಅಗತ್ಯವುಳ್ಳ ಆರರಿಂದ ಎಂಟು ಮಕ್ಕಳ ವೈವಿಧ್ಯಮಯ ಗುಂಪನ್ನು ಕಾಣಬಹುದು. ಇಬ್ಬರು ಮಕ್ಕಳಿಗೆ ಒಂದು ರೀತಿಯ ನೆರವು ಬೇಕಾದರೆ, ಚಂಚಲತೆ ಮತ್ತು ಅತಿಯಾದ ಚಟುವಟಿಕೆಯ ದೌರ್ಬಲ್ಯ (ಅಟೆನ್ಷನ್ ಡಿಫಿಸಿಟ್ ಹೈಪರ್ ಆಕ್ಟಿವಿಟಿ ——ಸಾರ್ಡರ್; ADHD) ಉಳ್ಳ ಇಬ್ಬರು ಮಕ್ಕಳು, ದೈಹಿಕ ಊನವಿರುವ ಮೂವರು, ಆಟಿಸಂನಿಂದ ಬಳಲುತ್ತಿರುವ ಒಬ್ಬರೋ ಇಬ್ಬರು ಮಕ್ಕಳು .ಅಂತಹ ಪರಿಸ್ಥಿತಿಯಲ್ಲಿ, ಯಾವುದೇ ನೆರವು ಲಭ್ಯವಿಲ್ಲದಿದ್ದರೆ ಯಾರಿಗೇ ಆದರೂ ಸಮಸ್ಯೆ ಆಗದೇ ಇರದು.

ಹಾಗಾಗಿ, ತರಗತಿಯ ನಿರ್ವಹಣೆ ಅತ್ಯವಶ್ಯ ಎಂದು ನಾನು ಮನಗಂಡೆ. ಪಠ್ಯ ವಿಷಯವನ್ನು ಚೆನ್ನಾಗಿ ತಿಳಿದುಕೊಂಡಿರುವುದು ಮುಖ್ಯ ಹೌದು, ಆದರೆ ತರಗತಿಯನ್ನು ನಿಭಾಯಿಸುವ ಕಲೆ ಗೊತ್ತಿಲ್ಲದಿದ್ದರೆ ಅದ್ಭುತ ವಿಷಯಗಳನ್ನೆಲ್ಲ ನಿಮಗೆ ಪಾಠ ಮಾಡಲಾಗುವುದಿಲ್ಲ. ಅದೃಷ್ಟವಶಾತ್, ತರಗತಿಯಲ್ಲಿ ಪ್ರಗತಿ ಕಾಣಬೇಕಾದರೆ ದೊಡ್ಡ ತಂತ್ರ ವಿಧಾನಗಳಾದ ಪಠ್ಯಕ್ರಮ, ಶಿಸ್ತು ಮತ್ತು ಪಾಠ ಯೋಜನೆಯಷ್ಟೇ ಸಾಲದು, ಅದರೊಂದಿಗೆ ಇನ್ನೂ ಅನೇಕ ಸಣ್ಣಸಣ್ಣ ಸಂಗತಿಗಳೂ ಮುಖ್ಯವೆನಿಸುತ್ತವೆ.

ಬದಲಾದ ಶಿಕ್ಷಣ ವ್ಯವಸ್ಥೆಯ ಸನ್ನಿವೇಶದಲ್ಲಿ, ಸಾಮಾನ್ಯ ತರಗತಿಯಲ್ಲೇ ಬೇರೆಬೇರೆ ಸಾಮರ್ಥ್ಯದ ವಿದ್ಯಾರ್ಥಿಗಳನ್ನು ಕಾಣುತ್ತೇವೆ. ಹಾಗಿರುವಾಗ ಸಮನ್ವಯ ಶಿಕ್ಷಣದ ಅರಿವು ಇಲ್ಲದಿರುವ ನಮ್ಮ ಶಿಕ್ಷಕರಿಗೆ ಬಹಳ ಕಷ್ಟವಾಗುವುದು ಸಹಜ. ವೈಯಕ್ತಿಕವಾಗಿ, 'ಸಮನ್ವಯ' ಎಂಬ ಪದವೇ ತೀರ ಶೋಕಿಯದ್ದು ಹಾಗೂ ಪಾಶ್ಚಿಮಾತ್ಯರಿಂದ ಬಂದುದು ಎಂದು ನನಗೆ ಅನಿಸುತ್ತದೆ. ಸಾಮಾನ್ಯ ತರಗತಿಯೊಂದರಲ್ಲಿ ವಿಶೇಷ ಮಕ್ಕಳನ್ನು ಸೇರ್ಪಡೆ ಮಾಡಿಬಿಡುವುದು ಮಾತ್ರ ಸಾಕಾಗುವುದಿಲ್ಲ; ಅದು ಒಂದು ಕಾರ್ಯಕ್ರಮವಲ್ಲ, ಬದಲಾಗಿ ಅದೊಂದು ನಿಲುವು. ಮನೋಭಾವ.

ಮಕ್ಕಳು ತರಗತಿಯಲ್ಲಿ ಕುಳಿತುಕೊಳ್ಳುವ ಕ್ರಮದಲ್ಲಿ ಮಾಡಿದ 'ಸಣ್ಣ' ಬದಲಾವಣೆಯಿಂದ 'ದೊಡ್ಡ' ಪರಿಣಾಮವಾಗಿರುವುದನ್ನು ಯಾವುದೇ ವೆಚ್ಚವಿಲ್ಲದೇ ಮಕ್ಕಳ ಕಲಿಕೆಯಲ್ಲಿ ಕಂಡುಬಂದ ಪ್ರಗತಿಯನ್ನು ಗಮನಿಸೋಣ.

ಸಾಂಪ್ರದಾಯಿಕ ಶೈಲಿಯ ತರಗತಿಯ ಬಗ್ಗೆ ಯೋಚಿಸಿದಾಗಲೆಲ್ಲ, ಮಕ್ಕಳು ತಮ್ಮ ಡೆಸ್ಕ್ ಗಳ ಮುಂದೆ ಕುಳಿತ ಮತ್ತು ಅವರಿಗೆ ಎದುರಾಗಿ ನಿಂತ ಶಿಕ್ಷಕರು ಅಂದಿನ ಪಾಠವನ್ನು ವಿವರಿಸುತ್ತಿರುವ ದೃಶ್ಯ ನಮ್ಮ ಕಣ್ಮುಂದೆ ಬರುತ್ತದೆ. ಮೊದಲ ಬೆಂಚಿನ ಮಕ್ಕಳನ್ನು ಶ್ರದ್ಧೆಯ ವಿದ್ಯಾರ್ಥಿಗಳು ಎಂದು ಪರಿಗಣಿಸುತ್ತೇವೆ. ಅವರು ಯಾವುದೇ ಮುಖ್ಯ ಸಂಗತಿಗಳಿಂದ ಹೊರಗುಳಿಯದಂತೆ ನೋಡಿಕೊಳ್ಳುತ್ತೇವೆ. ಕೆಲವೊಮ್ಮೆ ವಿದ್ಯಾರ್ಥಿಗಳ ಎತ್ತರಕ್ಕೆ ಅನುಗುಣವಾಗಿ ಕುಳಿತು ಕೊಳ್ಳುವಂತೆ, ಆ ಮೂಲಕ ಎಲ್ಲರಿಗೂ ಕಪ್ಪು ಹಲಗೆಯಲ್ಲಿ ಬರೆದಿರುವುದು ಸಮಾನವಾಗಿ ಕಾಣುವಂತೆ ಶಿಕ್ಷಕರು ಕ್ರಮಕೈಗೊಳ್ಳುತ್ತಾರೆ. ಅಲ್ಲದೆ, ಶೈಕ್ಷಣಿಕ ಕಾಳಜಿ ಮತ್ತು ವಿದ್ಯಾರ್ಥಿಗಳಲ್ಲಿ ಸಹಕಾರ ಮನೋಭಾವವನ್ನು ಉತ್ತೇಜಿಸುವ ದೃಷ್ಟಿಯಿಂದ ಸಣ್ಣ ಗುಂಪನ್ನೂ ಮಾಡುವುದುಂಟು.

ಕಲಿಯಲು, ಪರಿಶೋಧಿಸಲು ಅನುವಾಗುವಂತೆ ಮಕ್ಕಳು ಕುಳಿತಲ್ಲಿಂದ ಎದ್ದು ಓಡಾಡುವಂತಹ ಹೊಸ ವಿಧಾನವನ್ನೂ ನೀವು ನೋಡಿರಬಹುದು. ವಿಶೇಷ ಮಕ್ಕಳ ವಿಚಾರಕ್ಕೆ ಬಂದರೆ ಇದು ಅಸಾಮಾನ್ಯವಾದ ಸಂಗತಿಯೇನಲ್ಲ. ತರಗತಿಗಳಲ್ಲಿರುವ ಡೆಸ್ಕ್ ಗಳನ್ನೆಲ್ಲ ತೆಗೆದು ಅವುಗಳ ಜಾಗದಲ್ಲಿ ಮೇಜು ಅಥವಾ ಚಾಪೆ ಇರಿಸಿ ಬಿಡಿ ಎಂದು ಸಲಹೆ ನೀಡುತ್ತೇನೆ ಎಂದು ನೀವು ಅಂದುಕೊಳ್ಳುತ್ತಿರಬಹುದು, ನಾನು ಹಾಗೆ ಮಾಡುವುದಿಲ್ಲ. ಬೇರೆ ಮಕ್ಕಳ ಸಾಂಗತ್ಯದೊಂದಿಗೆ ಕೆಲಸ ಮಾಡಲು ಸಮಸ್ಯೆ ಇರುವ ಮಗುವಿಗೆ ಡೆಸ್ಕ್ ಗಳ ಬಳಕೆ ಬಹಳ ಒಳ್ಳೆಯದು.

ವಿಶೇಷವಾಗಿ, ವರ್ತನೆಯ ಸಮಸ್ಯೆ ಅಥವಾ ದೈಹಿಕ ಊನ/ ದೃಷ್ಟಿದೋಷ ಇರುವ ವಿದ್ಯಾರ್ಥಿಗಳು ತರಗತಿಯಲ್ಲಿ ಇದ್ದರೆ, ತರಗತಿಯಲ್ಲಿ ಕುಳಿತುಕೊಳ್ಳುವ ಕ್ರಮ ಪ್ರಮುಖ ಪಾತ್ರವಹಿಸುತ್ತದೆ. ಆಗ ಪರಿಸ್ಥಿತಿಗೆ ಅನುಗುಣವಾಗಿ ಕ್ರಿಯಾಶೀಲವಾಗಿ ಚಿಂತಿಸಬೇಕಾಗುತ್ತದೆ. ವಿಶೇಷ ಮಕ್ಕಳಿಗೆ ಸಂಗತಿಗಳನ್ನು ಗ್ರಹಿಸಿ ಅರ್ಥಮಾಡಿಕೊಳ್ಳಲು ಹೆಚ್ಚು ಸಮಯ ಬೇಕಾಗಬಹುದು. ಮತ್ತು ಅವರ ಆತ್ಮಗೌರವಕ್ಕೆ ಚ್ಯುತಿ ಬರದಂತೆ ತರಗತಿಯನ್ನು ಸಂಘಟಿಸಲು ಒಬ್ಬ ಶಿಕ್ಷಕಿಯಾಗಿ ನೀವು ಹೆಚ್ಚಿನ ಶ್ರಮವಹಿಸಬೇಕಾದೀತು.

ನಿಮಗೆ ಈ ವಿಧಾನ ಪರಿಚಿತವಿರಬಹುದು ಮತ್ತು ಈಗಾಗಲೇ ನೀವು ಇದನ್ನು ಮಾಡುತ್ತಿರಬಹುದು; ಸಾಲಾಗಿ ಕೂರಿಸುವುದು, ವೃತ್ತಾಕಾರದಲ್ಲಿ, ಅರ್ಧವೃತ್ತಾಕಾರದಲ್ಲಿ, ಮುಕ್ತವಾಗಿ ಇತ್ಯಾದಿ ಕೂರಿಸುವ ಕ್ರಮವನ್ನು ನೀವು ಅನುಸರಿಸುತ್ತಿರಬಹುದು. ಪ್ರತಿಯೊಂದು ವಿಧಾನದಲ್ಲಿಯೂ ಅದರದ್ದೇ ಆದ ಸಾಧಕ; ಬಾಧಕವಿರುತ್ತದೆ. ಆದರೆ ಕುಳಿತುಕೊಳ್ಳುವ ಕ್ರಮವು ವಿದ್ಯಾರ್ಥಿಯ ಕಲಿಕಾ ಪ್ರಗತಿಯನ್ನು ಪ್ರಭಾವಿಸುವಲ್ಲಿ ಬಹುಮುಖ್ಯ ಪಾತ್ರವಹಿಸುತ್ತದೆ. ಹಾಗಾಗಿ ಶಿಕ್ಷಕರು ಆಯಾ ಸನ್ನಿವೇಶಗಳಿಗೆ, ತರಗತಿಗಳಿಗೆ ಮತ್ತು ಎಲ್ಲ ವಿದ್ಯಾರ್ಥಿಗಳಿಗೆ ಸರಿಯಾಗಿ ಕಾಣುವ ರೀತಿಯಲ್ಲಿ ಆಸನ ಕ್ರಮವನ್ನು ಆಯ್ಕೆಮಾಡಿಕೊಂಡು, ಅದಕ್ಕೆ ಸಮಯ ನಿಗದಿಪಡಿಸಬಹುದು. ಶಿಕ್ಷಕರು ವಿಭಿನ್ನ ಬಗೆಯ ಆವಶ್ಯಕತೆಗಳನ್ನು ಮತ್ತು ವಿವಿಧ ಬೋಧನಾ ಉದ್ದೇಶಗಳನ್ನು ಈಡೇರಿಸಬೇಕಾಗಿರುವುದರಿಂದ ಸೂಕ್ತವೆನಿಸುವ

ಯಾವುದೇ ಒಂದು ಕ್ರಮವಿಲ್ಲ. ಒಂದು ವೇಳೆ ಶಿಕ್ಷಕರು, 'ಈ ತರಗತಿಯಲ್ಲಿ ಒಬ್ಬ ಸಮಸ್ಯೆಯುಳ್ಳ ವಿದ್ಯಾರ್ಥಿಗಳಿರುವ ಕಾರಣ ಆಸನ ಕ್ರಮವನ್ನು ಬದಲಾಯಿಸುತ್ತಿದ್ದೇನೆ' ಎಂದು ಪ್ರಕಟಿಸಿ ಬಿಟ್ಟರೆ ಅವನು/ಅವಳು ಎಲ್ಲರಿಂದ ಪ್ರತ್ಯೇಕಗೊಳ್ಳುತ್ತಾನೆ/ಳೆ. ಹಾಗಾಗಿ, ಆಸನ ಕ್ರಮವನ್ನು ಬದಲಾಯಿಸಿದರೂ, ಅದನ್ನು ಸಾಮಾನ್ಯ ತರಗತಿಯ ನಿಯಮದಂತೆಯೇ ಪರಿಗಣಿಸಬೇಕು ಎಂಬುದು ನನ್ನ ಸಲಹೆ.

ವಿಶೇಷ ಅಗತ್ಯವುಳ್ಳ ವಿದ್ಯಾರ್ಥಿಗಳು ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಬೇಕು ಮತ್ತು ಕಲಿಕೆಯಲ್ಲಿ ಪ್ರಗತಿ ಕಾಣಬೇಕು ಎಂಬುದಕ್ಕಾಗಿ ನೀವು ಮಾಡಬಹುದಾದ ಕೆಲವು ತರಗತಿಯ ಆಸನ ವ್ಯವಸ್ಥೆಗಳು:

ಗಾಲಿ ಕುರ್ಚಿ ಬಳಸುವ ಮಗುವಿಗೆ ಅದರ ಮುಂದೆ ಅಡೆತಡೆ ಇರಬಾರದು. ಇನ್ನು ಕೆಲವು ಮಕ್ಕಳಿಗೆ ಕಡಮೆ ಎತ್ತರದ ಮತ್ತು ಹೆಚ್ಚಿನ ಬಲ ನೀಡುವ ಕುರ್ಚಿ, ಸುಲಭವಾಗಿ ಬರೆಯಲು ನೆರವಾಗುವಂತಹ ಇಳಿಜಾರಿನಂತಹ ಡೆಸ್ಕ್ ಬೇಕಾದೀತು. ಹಾಗೆಯೇ, ಆಟಿಸಂ ಸಮಸ್ಯೆ ಇರುವ ಮಕ್ಕಳಿಗೆ ಇತರ ಯಾವುದೇ ಕೋರ್ಸ್‌ಗೆ ಇರುವಂತೆ ರಚನಾತ್ಮಕ ಕಾರ್ಯಕ್ರಮಗಳು ಬೇಕಾದೀತು. ಏಕಾಗ್ರತೆಯ ಕೊರತೆಯಿರುವ ಮಗುವನ್ನು ಕಿಟಕಿ ಅಥವಾ ಬಾಗಿಲಿನ ಬಳಿ ಕೂರಿಸಿದರೆ ಆ ಮಗುವಿನ ಗಮನ ಬೇರೆಡೆ ಹರಿಯಲು ದಾರಿಮಾಡಿ ಕೊಟ್ಟಂತಾಗುತ್ತದೆ ಅಲ್ಲವೇ?

ಶ್ರವಣದೋಷವಿರುವ ಮಕ್ಕಳು ತುಟಿಯ ಚಲನೆಯ ಆಧಾರದಲ್ಲಿ ಮಾತನ್ನು ಗ್ರಹಿಸಿ ಕಲಿಯುತ್ತಾರೆ. ಅಂತಹ ಮಕ್ಕಳನ್ನು ಮೊದಲ ಮೂರು ಸಾಲಿನಲ್ಲಿ ಕೂರಿಸುವುದು, ಅವರೆಡೆಗೆ ಬೆನ್ನು ಹಾಕಿ ಮಾತನಾಡದಂತೆ ಎಚ್ಚರವಹಿಸುವುದು ಉತ್ತಮ. ಕೆಲವೊಮ್ಮೆ ಹೇಳಿದ್ದನ್ನೇ ಮತ್ತೆ ಮತ್ತೆ ಹೇಳುವ ತಾಳ್ಮೆ ಬೇಕಾಗುತ್ತದೆ. ಶ್ರವಣದೋಷವಿರುವ ಮಕ್ಕಳು ಇದ್ದಾಗ ತರಗತಿಯಲ್ಲಿ ಸಾಕಷ್ಟು ಬೆಳಕು ಇರುವಂತೆ ನೋಡಿಕೊಳ್ಳಬೇಕು. ಆಗ ಅವರು ಶಿಕ್ಷಕರ ತುಟಿಯ ಚಲನೆಯನ್ನು ಸ್ಪಷ್ಟವಾಗಿ ನೋಡಿ ಅವರ ಮಾತುಗಳನ್ನು ಗ್ರಹಿಸಿ ಅರ್ಥೈಸಿಕೊಳ್ಳಲು ಸುಲಭವಾಗುತ್ತದೆ. ಹಾಗಾಗಿ ಅಂತಹ ತರಗತಿಯಲ್ಲಿ ಆಸನ ಕ್ರಮವೂ ಅಂತಹ ವಿದ್ಯಾರ್ಥಿ ಸ್ನೇಹಿಯಾಗಿರಬೇಕು. ಒಂದು ವೇಳೆ ಆಟಿಸಂ ಮಕ್ಕಳು ಇದ್ದರೆ, ಬೆಳಕಿನ ತೀಕ್ಷ್ಣತೆಯನ್ನು ತಗ್ಗಿಸುವುದರಿಂದ ಅವರಿಗೆ ಹೆಚ್ಚು ಪ್ರಯೋಜನವಾಗುತ್ತದೆ.

ಎರಡನೆಯದಾಗಿ, ಶ್ರವಣ ದೋಷವುಳ್ಳ ಮಕ್ಕಳು ಮತ್ತು ಶಿಕ್ಷಕಿಯ ನಡುವಿನ ಅಂತರ ಕಡಮೆ ಇದ್ದರೆ ಅವರ ಗ್ರಹಣ ಸಾಮರ್ಥ್ಯ ಹೆಚ್ಚುತ್ತದೆ. ಅದಕ್ಕಾಗಿ ಅವರಿಗೆ ಸುಲಭವಾಗಿ ಸರಿಸಬಹುದಾದ ಕುರ್ಚಿಗಳನ್ನು ಒದಗಿಸುವುದು ಹೆಚ್ಚು ಸೂಕ್ತ. ಯಾವುದೇ ಚಟುವಟಿಕೆ ಅಥವಾ ಶಾಲಾ ಸಮಾರಂಭಗಳಲ್ಲಿ ಆಯ್ದ ಮಕ್ಕಳಿಗಾಗಿ ಮೂಕ ಭಾಷೆಯ (ಸನ್ನೆಯ ಭಾಷೆ) ಮೂಲಕ ಮಾಹಿತಿ/ ವಿವರ ನೀಡುತ್ತಿದ್ದರೆ, ಅಂತಹ ಸಂದರ್ಭದಲ್ಲಿ ಮೂಕ ಭಾಷಾಕಾರರ ಮುಂಭಾಗದಿಂದ ನಮಗೆ ಅರಿವಿಲ್ಲದೆಯೇ ನಾವು ಹಾದು ಹೋಗುವುದುಂಟು. ಅಂತಹ ಪ್ರಮಾದಗಳನ್ನು ತಪ್ಪಿಸುವುದು.

ಶ್ರವಣದೋಷವಿರುವ ಮಕ್ಕಳು ಕೆಲವೊಂದು ಶ್ರವಣ ಸಾಧನಗಳನ್ನು ಬಳಸುವುದನ್ನು ನೋಡಿರಬಹುದು. ಆಗ, ಗಲಾಟೆಯಾಗದಂತೆ ನೋಡಿಕೊಳ್ಳಬೇಕು. ಅಂದರೆ, ಕೆಲವು ಮಕ್ಕಳು ಹಿಂಭಾಗದಲ್ಲಿ ಕುಳಿತು ಮಾತನಾಡುವುದು, ಪಿಸುಗುಟ್ಟುವುದರಿಂದ ಆ ಮಕ್ಕಳಿಗೆ ತೊಂದರೆಯಾಗುತ್ತದೆ.

ದೃಷ್ಟಿದೋಷವಿರುವ ಮಕ್ಕಳಿದ್ದರೆ, ತರಗತಿಯ ಭೌತಿಕ ವ್ಯವಸ್ಥೆಯು ಸ್ಥಿರವಾಗಿರಬೇಕು. ಪದೇ ಪದೇ ಆಸನ ಕ್ರಮವನ್ನು ಬದಲಾಯಿಸುವುದನ್ನು ಸಾಧ್ಯವಾದಷ್ಟು ತಪ್ಪಿಸಬೇಕು. ಬದಲಾವಣೆ ಮಾಡುವುದಕ್ಕೂ ಸಾಕಷ್ಟು ಮೊದಲೇ ಅವರಿಗೆ ತಿಳಿಸಿರಬೇಕು. ಪದೇ ಪದೇ ಆಗುವ ಬದಲಾವಣೆಗಳನ್ನು ಸಹಿಸದ ಆಟಿಸಂ ಮಕ್ಕಳಿಗೂ ಇದೇ ಮುನ್ನೆಚ್ಚರಿಕೆ ಅನ್ವಯಿಸುತ್ತದೆ.

ಇಂತಹ ಮಕ್ಕಳು ನಿರಂತರವಾಗಿ ಆತಂಕಕ್ಕೆ ಒಳಗಾಗುತ್ತಾರೆ ಮತ್ತು ತಮ್ಮ ಭಾವನೆಯನ್ನು ವ್ಯಕ್ತಪಡಿಸಲು ಇಚ್ಛಿಸದೇ ಇರಬಹುದು. ಹಾಗಾಗಿ, ತರಗತಿಯಲ್ಲಿ ಕೇವಲ ಪೀಠೋಪಕರಣಗಳನ್ನಷ್ಟೇ ಹೊಸ ರೀತಿಯಲ್ಲಿ ಜೋಡಿಸಿ ವಿನ್ಯಾಸ ಬದಲಾಯಿಸಿದರೆ, ಆ ಮಕ್ಕಳೂ ಇಷ್ಟಪಟ್ಟು ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಾರೆ ಮತ್ತು ಆರಾಮವಾಗಿ ಓಡಾಡುತ್ತಾರೆ. ಆಸನ ವ್ಯವಸ್ಥೆ ಬದಲಾವಣೆಗಿಂತ ಹೆಚ್ಚಿನದೆಂದರೆ, ಚಟುವಟಿಕೆಗಳು ನಡೆಯುವಾಗ ವಿಶೇಷ ಮಕ್ಕಳ ಬಳಿ ಶಿಕ್ಷಕಿ ಅಥವಾ ಸಹಪಾಠಿ ಗೆಳೆಯರು ಕುಳಿತುಕೊಳ್ಳುವುದು, ಇದರಿಂದ ಮಹತ್ತರ ಬದಲಾವಣೆ ಕಾಣಲು ಸಾಧ್ಯ.

ಸಮನ್ವಯ ವ್ಯವಸ್ಥೆಯಲ್ಲಿ ವಿವಿಧ ಬಗೆಯ ಕಲಿಕಾ ಸಾಮರ್ಥ್ಯ ಮತ್ತು ಸ್ವಭಾವವುಳ್ಳ ವಿದ್ಯಾರ್ಥಿಗಳನ್ನು ಶಿಕ್ಷಕರು ನಿಭಾಯಿಸಬೇಕಾಗುತ್ತದೆ. ವಿಶೇಷ ಮಕ್ಕಳು ಶಾಲೆಯಿಂದ ಹೊರಗುಳಿಯುವ ಮತ್ತು ಮಾನಸಿಕ ಆಘಾತಕ್ಕೆ ಒಳಗಾಗುವ ಅಪಾಯ ಹೆಚ್ಚು. ನನಗೆ ಅನಿಸುವ ಪ್ರಕಾರ, ಅಂತಹ ಮಕ್ಕಳಿಗೆ ಪಾಠ ಯೋಜನೆಗಿಂತ ಹೆಚ್ಚಾಗಿ, ಆ ಮಕ್ಕಳ ಮೂಲಭೂತ ಆವಶ್ಯಕತೆ ಮತ್ತು ಅಭ್ಯಾಸಗಳತ್ತ ಹೆಚ್ಚಿನ ಗಮನಕೊಡುವುದು, ತರಗತಿಯಲ್ಲಿ ಹಿಡಿತ ಸಾಧಿಸುವ ನಿಟ್ಟಿನಲ್ಲಿ ವಿಭಿನ್ನ ಆಸನಕ್ರಮವನ್ನು ಅನುಸರಿಸುವುದು ಮತ್ತು ಶೈಕ್ಷಣಿಕ ಪ್ರಗತಿಯನ್ನು ಸಾಧಿಸುವ ದಿಸೆಯಲ್ಲಿ ಕೂಡ ಗಮನಹರಿಸುವುದು ಉತ್ತಮ. ಹೀಗೆ, ವರ್ತನೆಯಲ್ಲಿ, ದೈಹಿಕವಾಗಿ ಮತ್ತು ಬೌದ್ಧಿಕವಾಗಿ ವಿವಿಧ ಲಕ್ಷಣಗಳುಳ್ಳ ಮಕ್ಕಳನ್ನು ಒಳಗೊಂಡಿರುವ ಸಮನ್ವಯ ಶಿಕ್ಷಣ ವ್ಯವಸ್ಥೆಯಲ್ಲಿ ಪಾಠಮಾಡಬೇಕಾದರೆ ಆಸನ ಕ್ರಮದ ಬಗ್ಗೆ ಶಿಕ್ಷಕರಿಗೆ ತಿಳಿವಳಿಕೆ ಇರಬೇಕಾದುದು ಅತ್ಯವಶ್ಯ.

'ಎಲ್ಲರಿಗೂ ಶಿಕ್ಷಣ' ಅಭಿಯಾನ ಮತ್ತು ಶಿಕ್ಷಣದ ಹಕ್ಕು ಕಾಯ್ದೆಯು ಎಲ್ಲ ವಲಯಗಳಲ್ಲೂ ಗುರುತಿಸಿಕೊಳ್ಳುತ್ತಿದೆ. ಇದು, ಸಮನ್ವಯ ಶಿಕ್ಷಣದಲ್ಲಿರುವ ಅಂತರ ಮತ್ತು ಎಲ್ಲ ವಿದ್ಯಾರ್ಥಿಗಳನ್ನು ಒಳಗೊಳ್ಳುವ ಶಿಕ್ಷಣ ನೀಡುವ ನಿಟ್ಟಿನಲ್ಲಿ ಶಿಕ್ಷಕರನ್ನು ರೂಪಿಸುವ ಪ್ರಕ್ರಿಯೆಯ ನಡುವಿನ ಸೇತುವೆಯಾಗಬಹುದು. ಮೂಲಭೂತ ಶೈಕ್ಷಣಿಕ ಆಚರಣೆಗಳ ಬಗ್ಗೆ ಮುಂಚಿತವಾಗಿ ಯೋಜನೆ ಸಿದ್ಧಪಡಿಸಿಕೊಂಡಷ್ಟೂ, ಯಾವಾಗಲೂ ಎದುರಾಗುವ ಅಯೋಜಿತ ಪರಿಸ್ಥಿತಿಗಳನ್ನು ಎದುರಿಸಲು ಸಾಧ್ಯವಾಗಬಹುದು.

**ನೀಲಂ ಶಿಂಧೆ:** ಇವರು, ವಿವಿಧ ರೀತಿಯ ಅಸಾಮರ್ಥ್ಯಗಳುಳ್ಳ ಮಕ್ಕಳು ಹಾಗೂ ವಯಸ್ಕರಿಗಾಗಿ ಕಾರ್ಯಕ್ರಮಗಳು, ಯೋಜನೆಗಳನ್ನು ರೂಪಿಸಿದ ವೃತ್ತಿಪರ ಅನುಭವವನ್ನು ಹೊಂದಿದ್ದು, ಭಾರತ ಮತ್ತು ಪೆಸಿಫಿಕ್ ಪ್ರಾಂತ್ಯದಲ್ಲಿ ಕೆಲಸ ಮಾಡಿದ್ದಾರೆ. ವಿಶೇಷ ಮಕ್ಕಳ ಪಠ್ಯಕ್ರಮ ವಿನ್ಯಾಸ ಮಾಡುವುದು, ಅಂತಹ ಮಕ್ಕಳ ನಿರ್ವಹಣೆಯ ಬಗ್ಗೆ ಹಾಗೂ ವಿಶೇಷ ಮತ್ತು ಸಮನ್ವಯ ಶಿಕ್ಷಣ ನೀಡುವುದು; ಈ ದಿಸೆಯಲ್ಲಿ ಶಿಕ್ಷಕರನ್ನು ರೂಪಿಸುವ ಕೆಲಸವನ್ನು ಮಾಡುತ್ತಾರೆ. ಜೀವನೋಪಾಯದ ಚಟುವಟಿಕೆಗಳು ಹಾಗೂ ವಿಭಿನ್ನ ಕಾರ್ಯತಂತ್ರಗಳನ್ನು ರೂಪಿಸುವ ಇವರು, ದೈಹಿಕ ಅಸಾಮರ್ಥ್ಯವುಳ್ಳ ಮಕ್ಕಳು ಮತ್ತು ವಯಸ್ಕರು ಮನೆ, ಶಾಲೆ ಮತ್ತು ಕೆಲಸದ ವಾತಾವರಣದಲ್ಲಿ ತಮ್ಮನ್ನು ಸ್ವತಂತ್ರವಾಗಿ ನಿಭಾಯಿಸಿಕೊಳ್ಳುವ ಕಾರ್ಯತಂತ್ರಗಳನ್ನು ವಿನ್ಯಾಸ ಮಾಡುತ್ತಾರೆ.

ಅವರ ಸಂಪರ್ಕಕ್ಕೆ: nilshind@gmail.com